# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2086

ಸದಸ್ಯರ ಹೆಸರು : ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 17-03-2022

ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯ ಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರಿ ನೌಕರರಿಗೆ 7ನೇ ವೇತನ ಆಯೋಗವನ್ನು 2022ರ ಬಜೆಟ್‌ನಲ್ಲಿ ಘೋಷಿಸದಿರಲು ಕಾರಣವೇನು; 2022-23ನೇ ಸಾಲಿನಿಂದಲೇ ಜಾರಿಯಾಗುವಂತೆ 7ನೇ ವೇತನ ಆಯೋಗವನ್ನು ರಚನೆ ಮಾಡಲಾಗುವುದೇ; | ಸಾಂಪ್ರದಾಯಿಕವಾಗಿ ರಾಜ್ಯ ಸರ್ಕಾರವು ತನ್ನದೇ ಆದ ವೇತನ ಆಯೋಗ/ವೇತನ ಸಮಿತಿಗಳಂತಹ ತಜ್ಞ ಸಮಿತಿಗಳ ಶಿಫಾರಸ್ಸಿನ ಮೇರೆಗೆ ರಾಜ್ಯ ಸರ್ಕಾರಿ ನೌಕರರ ವೇತನ ಮತ್ತು ಭತ್ಯೆಗಳನ್ನು ಕಾಲದಿಂದ ಕಾಲಕ್ಕೆ ಪರಿಷ್ಕರಿಸಿಕೊಂಡು ಬಂದಿರುತ್ತದೆ. ಇತ್ತೀಚೆಗೆ 6ನೇ ರಾಜ್ಯ ವೇತನ ಆಯೋಗದ ಶಿಫಾರಸ್ಸಿನಂತೆ ರಾಜ್ಯ ಸರ್ಕಾರಿ ನೌಕರರ ವೇತನ, ಭತ್ಯೆ ಮತ್ತು ಪಿಂಚಣಿಯನ್ನು ಪರಿಷ್ಕರಿಸಲಾಗಿರುತ್ತದೆ. 2018ರ ಪರಿಷ್ಕೃತ ವೇತನ ಶ್ರೇಣಿಗಳು ಜಾರಿಯಾಗಿ ಇನ್ನೂ 5 ವರ್ಷಗಳು ಪೂರ್ಣಗೊಂಡಿರುವುದಿಲ್ಲ. |
| ಆ) | 7ನೇ ವೇತನ ಆಯೋಗದ ನಿರೀಕ್ಷೆಯಲ್ಲಿದ್ದ ರಾಜ್ಯ ಸರ್ಕಾರಿ ನೌಕರರಿಗೆ ನಿರಾಸೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮೇಲಿನ ಉತ್ತರದಿಂದ ಉದ್ಭವಿಸುವುದಿಲ್ಲ. |
| ಇ) | 7ನೇ ವೇತನ ಆಯೋಗದ ರಚನೆಗೆ | ವೇತನ ಪರಿಷ್ಕರಣೆಯ ವಿಷಯವು |

| | | |
|---|---|---|
| | ಸರ್ಕಾರವು ಸಮಿತಿ. ರಚನೆ ಮಾಡಲು ಮುಂದಾಗುವುದೆ; ಸಮಿತಿ ರಚನೆ ಮಾಡಿ ಸರ್ಕಾರಿ ನೌಕರರಿಗೆ ಮಧ್ಯಂತರ ಪರಿಹಾರವಾಗಿ ವಿಶೇಷ ಸೌಲಭ್ಯವನ್ನು ನಿಡುವುದೇ (ಮಾಹಿತಿ ನೀಡುವುದು) | ಸರ್ಕಾರದ ನೀತಿ ನಿರ್ಣಯಕ್ಕೆ ಸಂಬಂಧಿಸಿದ್ದಾಗಿದ್ದು, ಈ ಬಗ್ಗೆ ಸರ್ಕಾರದ ಆಯವ್ಯಯ ಸ್ಥಿತಿಗತಿಗಳನ್ನು ಗಮನದಲ್ಲಿರಿಸಿ ಸಂದರ್ಭಾನುಸಾರ ಕ್ರಮ ಕೈಗೊಳ್ಳಲಾಗುವುದು. |

ಸಂ: ಆಇ 16 ಎಸ್‌ಆರ್‌ಪಿ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ